**ಕೆ.ಬಿ. ಶಿವತಾರಕ್**

# ಹೊಳಕಲ್ ಬೆಟ್ಟದಲ್ಲಿ ಇತಿಹಾಸ ಆರಂಭಕಾಲದ ಅವಶೇಷ

ಒಂದು ಕಾಲದ ಜನಜೀವನದ ಬಗ್ಗೆ ತಿಳಿಯಲು, ಸಂಸ್ಕೃತಿಯ ಸ್ವರೂಪ ಮತ್ತು ಬೆಳವಣಿಗೆಯ ಘಟ್ಟಗಳನ್ನು ಅರಿಯಲು ಅಂದು ಉಪಯೋಗದಲ್ಲಿದ್ದು ಇಂದಿಗೂ ಉಳಿದುಬಂದಿರುವ ವಸ್ತು ಅವಶೇಷಗಳು ಮುಖ್ಯ ಆಧಾರಗಳು. ಅವುಗಳಲ್ಲಿ ಮುಖ್ಯವಾದುದು – ಮಡಕೆ. "ಮಡಕೆಯನ್ನು ಸಂಸ್ಕೃತಿಯ ಮಾರ್ಗದರ್ಶಕ" ಎನ್ನುತ್ತಾರೆ. ಮಡಕೆ ಮಾಡುವುದು ಮಾನವನ ಒಂದು ಪ್ರಮುಖ ಅನ್ವೇಷಣೆ. ಇಂತಹ ಮಡಕೆಗಳನ್ನು ತನ್ನ ದಿನನಿತ್ಯದ ಉಪಯೋಗಕ್ಕೆ ಬಳಸಲಾಯಿತು.

ಪ್ರಸ್ತುತ ಹೊಳಕಲ್ಲು ಬೆಟ್ಟದಲ್ಲಿ ದೊರೆತಿರುವ ಮಡಕೆಗಳನ್ನು ಈ ಕಾಲದಲ್ಲಿದ್ದಂತಹ ಹಲವಾರು ಮಾದರಿಯ ಮಡಕೆಗಳೊಂದಿಗೆ ಹೋಲಿಸಿ ಅವುಗಳ ಪ್ರಾಮುಖ್ಯತೆಯನ್ನು ತಿಳಿಯಬಹುದಾಗಿದೆ. ಹೊಳಕಲ್ ಬೆಟ್ಟವು ತುಮಕೂರಿನ ವಾಯುವ್ಯಕ್ಕೆ ಶಿರಾ ತಾಲ್ಲೂಕಿನಲ್ಲಿದ್ದು, ತುಮಕೂರಿನಿಂದ 43 ಕಿ.ಮೀ. ದೂರದಲ್ಲಿದೆ. ಈ ಸ್ಥಳವು ಈಗ ಮೃದುವಾದ ಗ್ರಾನೈಟ್ ಕಲ್ಲಿಗೆ ಪ್ರಸಿದ್ಧವಾಗಿದೆ. ರಾಬರ್ಟ್ ಬ್ರೂಸ್ ಫೂಟ್ ಅವರು ಅಲ್ಲಿ ದೊರೆತ ಮಣ್ಣಿನ ಹೂಜಿಯ ಕೊಳವೆ, ಮಣ್ಣಿನ ಚಪ್ಪಟೆಯ ಮಣಿ, ಮಣ್ಣಿನ ಪಾತ್ರೆಯ ಭಾಗ ಮತ್ತು ವರ್ತುಲಾಕೃತಿಯ ಮಣಿಗಳ ಬಗ್ಗೆ ಮಾತ್ರ ತಿಳಿಸಿರುವರಾದರೂ, ಇಲ್ಲಿನ ಇನ್ನಾವುದೇ ಚಾರಿತ್ರಿಕ ಯುಗದ ಆರಂಭದ ಅವಶೇಷಗಳ ಬಗ್ಗೆ ತಿಳಿಸಿಲ್ಲ. ಡಾ|| ಎಂ. ಶೇಷಾದ್ರಿಯವರು ತಮ್ಮ ಸಂಪ್ರಬಂಧದಲ್ಲಿ ಈ ಸ್ಥಳವನ್ನು ಭೂಪಟದಲ್ಲಿ ಗುರುತಿಸಿರುವರಾದರೂ ಇದರ ಬಗ್ಗೆ ವಿವರಗಳನ್ನು ನೀಡಿರುವುದಿಲ್ಲ[1].

ಈ ಮೇಲಿನ ಮಾಹಿತಿಗಳ ಮೇರೆಗೆ ಇತ್ತೀಚೆಗೆ ಸರ್ವೇಕ್ಷಣೆ ಕೈಗೊಂಡಾಗ ಇತಿಹಾಸ ಆರಂಭ ಕಾಲದ ಮಡಕೆ ಚೂರುಗಳು ದೊರೆತಿವೆ. ಈ ಮಡಕೆಯ ಚೂರುಗಳ ಮಾದರಿ, ಬಣ್ಣ ಮತ್ತು ಅವುಗಳ ಮೇಲಿರಿಪ ಚಿತ್ರಗಳ ಆಧಾರದ ಮೇಲೆ ಅವುಗಳನ್ನು ಈ ಕೆಳ ಕಂಡಂತೆ ವಿವರಿಸಬಹುದು.

**ಮಾದರಿ I ಬಣ್ಣದ ಮಡಕೆಗಳು**

೧) ಬಣ್ಣವನ್ನು ಹೊಂದಿರುವ ಕಪ್ಪುಬಣ್ಣದ ಮಡಕೆ

೨) ಬಣ್ಣವನ್ನು ಹೊಂದಿರುವ ಕಪ್ಪು – ಕೆಂಪು ಬಣ್ಣದ ಮಡಕೆ

೩) ಬಣ್ಣವನ್ನು ಹೊಂದಿರುವ ಕೆಂಪು ಬಣ್ಣದ ಮಡಕೆ

೪) ಬಣ್ಣವನ್ನು ಹೊಂದಿರುವ ಕಂದು ಬಣ್ಣದ ಮಡಕೆ

ಹೀಗೆ ಇತಿಹಾಸ ಆರಂಭಕಾಲದ ಮಡಕೆಗಳನ್ನು ಮುಖ್ಯವಾಗಿ ನಾಲ್ಕು ಭಾಗಗಳಾಗಿ ವಿಂಗಡಿಸಿದರೂ

* ಇತಿಹಾಸ ಉಪನ್ಯಾಸಕರು, ಸೇಂಟ್ ಮೇರಿ ಸಿರಿಯನ್ ಕಾಲೇಜು, ಬ್ರಹ್ಮಾವರ, ದಕ್ಷಿಣ ಕನ್ನಡ ಜಿಲ್ಲೆ

1. ಎಕ್ಸ್‌ಪ್ಲೊರೇಶನ್ ಅಫ್ ಸೈಟ್ಸ್ ಆಫ್ ರೆಸ್ಲಿಪ್-ಕೋಟೆಡ್ ವೇರ್ ವಿತ್ ಕೆವೊಲಿನ್ ಡಿಸೈನ್ ಇನ್ ಮೈಸೂರ್ ಪು. ೧-೩

ಇವುಗಳಿಗಿರುವ ಬಣ್ಣಗಳನ್ನು ಆಧರಿಸಿ ಇನ್ನಷ್ಟು ಮಾದರಿಗಳನ್ನು ಹೇಳಬಹುದಾಗಿದೆ.

**ಮಾದರಿ II ವಿವಿಧ ಆಕೃತಿಯ ಚಿತ್ರಗಳು**

೧) ಸಮಾನಾಂತರ ಬಿಳಿಗೆರೆಗಳ ಮೇಲೆ ಕಂದು ಬಣ್ಣವನ್ನು ಲೇಪಿಸಿರುವ ಚಿತ್ರ.

೨) ಸಮಾನಾಂತರ ಬಿಳಿ ಚುಕ್ಕೆಗಳ ಮೇಲೆ ಕೆಂಪು ಬಣ್ಣವನ್ನು ಲೇಪನ ಮಾಡಿರುವ ಚಿತ್ರ.

೩) ಕೇಂದ್ರ ಬಿಂದುವಿನಿಂದ ನಾನಾ ಭಾಗಗಳಿಗೆ ಹರಿದಿರುವ ಗೆರೆಗಳಿರುವ ಚಿತ್ರ.

೪) ನೇರ ಗೆರೆಗಳನ್ನು ಹಾಕದೆ ಇರುವ ಚಿತ್ರ.

೫) ಓರೆಯಾದ ಗೆರೆಗಳ ಸಾಲನ್ನು ಮೂಡಿಸಿರುವ ಚಿತ್ರ.

೬) ಚುಕ್ಕೆ ಸಾಲಿರುವಂತೆ ಮಾಡಿರುವ ಚಿತ್ರ.

೭) ಲಂಬವಾಗಿ ಎಳೆದಿರುವ ಗೆರೆಗಳಿರುವ ಚಿತ್ರ.

ಹೀಗೆ ಹಲವಾರು ಮಾದರಿಯ ಆಕೃತಿಯ ಚಿತ್ರಗಳಿದ್ದು ಇವುಗಳು ಅತ್ಯಪೂರ್ವವಾದವುಗಳಾಗಿವೆ.

ಈ ಜಿಲ್ಲೆಯಲ್ಲಿ ಇದುವರೆಗೂ ನಡೆಸಿರುವ ಸರ್ವೇಕ್ಷಣೆಯ ಫಲವಾಗಿ ಇತಿಹಾಸ ಆರಂಭ ಕಾಲದ ಅವಶೇಷಗಳು ರಾಚವಾರನಹಳ್ಳಿ, ಯಲ್ಲಪ್ಪನಾಯಕನ ಹೊಸಕೋಟೆ, ಯಲ್ಲಪ್ಪನಾಯಕನ ಹಳ್ಳಿ, ನಿಡುಗಲ್ಲು, ಪಾವಗಡ, ಮರಿದಾಸನಹಳ್ಳಿ (ಪಾವಗಡ ತಾಲ್ಲೂಕು), ಬುಕ್ಕಾಪಟ್ಣ (ಶಿರಾ ತಾಲ್ಲೂಕು), ಮೂಗನ ಹುಣಸೆ (ಗುಬ್ಬಿ ತಾಲ್ಲೂಕು), ಕೈದಾಳ, ಜಲಗಾರದಿಬ್ಬ (ತುಮಕೂರು ತಾಲ್ಲೂಕು) ಮತ್ತಿತರ ಕಡೆಗಳಲ್ಲಿ ದೊರೆತಿವೆ. ಇದೇ ರೀತಿ ಈ ಜಿಲ್ಲೆಯಲ್ಲಿ ಪ್ರಾಗೈತಿಹಾಸಿಕ ನೆಲೆಗಳೂ ಹಲವಾರು ದೊರೆತಿವೆ.

## ಗ್ರಂಥ ಋಣ


ನಾಗರಾಜರಾವ್ ಎಂ. ಎಸ್ ಮತ್ತು ಮಲ್ಹೋತ್ರ ಕೆ.ಸಿ. 1965. ದಿ.ಸ್ಟೋನ್ ಏಜ್ ಹಿಲ್ ಡ್ವೆಲ್ಲರ್ಸ್ ಆಫ್ ತೆಕ್ಕಲಕೋಟೆ (ಪೂನ)

ಫೂಟ್. ಆರ್. ಬಿ. 1916. ಪ್ರಿ ಹಿಸ್ಟಾರಿಕ್ ಅಂಡ್ ಪ್ರೋಟೋ ಹಿಸ್ಟಾರಿಕ್ ಅಂಟಿಕ್ವಿಟಿಸ್ ಆಫ್ ಇಂಡಿಯ (ಮದ್ರಾಸ್)

ಸುಂದರ. ಎ. 1971. "ಚಾಲ್ಕೊಲಿಥಿಕ್ ಫೇಸ್ ಆಫ್ ದಿ ಅಪ್ಪರ್ ಕೃಷ್ಣಾವ್ಯಾಲಿ" ಸ್ಟಡೀಸ್ ಇನ್ ಇಂಡಿಯನ್ ಹಿಸ್ಟ್ರಿ ಅಂಡ್ ಕಲ್ಚರ್ ಸಂ :ರಿತ್ತಿ ಎಸ್. ಹೆಚ್. ಮತ್ತು ಗೋಪಾಲ್ ಬಿ. ಆರ್. (ಧಾರವಾಡ)

ವೀಲ್ಹರ್ ಆರ್. ಇ. ಎಮ್. 1948. ಎನ್ಶೆಂಟ್ ಇಂಡಿಯಾ ಸಂ.4 (ನ್ಯೂಡೆಲ್ಲಿ)

ಶಿವತಾರಕ್. ಕೆ. ಬಿ. 1992. "ತುಮಕೂರು ಜಿಲ್ಲೆಯಲ್ಲಿ ಇತ್ತೀಚೆಗೆ ದೊರೆತ ಕೆಲವು ಪ್ರಾಗೈತಿಹಾಸಿಕ ನೆಲೆಗಳು" ಇತಿಹಾಸ ದರ್ಶನ ಸಂ : 7 (ಬೆಂಗಳೂರು)

ಶೇಷಾದ್ರಿ. ಎಂ. 1961. "ಎಕ್ಸ್‌ಪ್ಲೋರೇಶನ್ ಆಫ್ ಸೈಟ್ಸ್ ಆಫ್ ರಸ್ಸಟ್-ಕೋಟೆಡ್ ವೇರ್ ವಿತ್ ಕೆವೊಲಿನ್ ಡಿಸೈನ್ ಇನ್ ಮೈಸೂರ್" ಹಾಫ್ ಇಯರ್ಲಿ ಜರ್ನಲ್ ಆಫ್ ದಿ ಮೈಸೂರ್ ಯೂನಿವರ್ಸಿಟಿ ಸಂ : XX ನಂ.2 (ಮೈಸೂರು)